

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 554 (626)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಹೆಚ್. ಎಂ. ರಮೇಶಗೌಡ(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಬಿ.ಬಿ.ಎಂ.ಪಿ. ದಾನಪತ್ರ ಕ್ರಯಪತ್ರ ಮತ್ತು ವಿಭಾಗಗಳ ಪತ್ರ ಕುರಿತು

(ಅ) ಬಿ.ಬಿ.ಎಂ.ಪಿ. ದಾನಪತ್ರ, ಕ್ರಯಪತ್ರ ಮತ್ತು ವಿಭಾಗ ಪತ್ರಗಳ ಅನ್ವಯ ಆಸ್ತಿ ವಿಭಜನೆ ಕಾನೂನುಬಾಹಿರವೆಂದು 20 ಅಕ್ಟೋಬರ್ 2014ರಲ್ಲಿ ಸುತ್ತೋಲೆ ಹೊರಡಿಸಿರುವುದು ನಿಜವೇ; (ವಿವರ ನೀಡುವುದು)

(ಆ) ಕೇವಲ ಆಸ್ತಿ ತೆರಿಗೆ, ಶುಲ್ಕ ಮಾತ್ರ ವಸೂಲಿ ಮಾಡುವ ಮಹಾನಗರ ಪಾಲಿಕೆ ಆಸ್ತಿ ವಿಭಜನೆಯ ಕುರಿತು ಯಾವ ಆದೇಶ ನಿಯಮಾವಳಿ ಅನ್ವಯ ಈ ಸುತ್ತೋಲೆ ಹೊರಡಿಸಿದೆ ;

(ಇ) ಬಿ.ಬಿ.ಎಂ.ಪಿ. ಸುತ್ತೋಲೆಯ ಪ್ರಕಾರ ಖಾತಾ ನೊಂದಾವಣೆ ವಿಭಜನೆಗಳು ಯಾವ ಆಸ್ತಿಗೆ ಅನ್ವಯಿಸುತ್ತವೆ ; ಪಾಲಿಕೆಯ ಸುತ್ತೋಲೆಯಿಂದ ಪಿತ್ರಾರ್ಜಿತ ಆಸ್ತಿ ಹಂಚಿಕೆಯಲ್ಲಿ ಜನಸಾಮಾನ್ಯರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಎ ಖಾತಾ ಮತ್ತು ಬಿ ಖಾತಾ ನಡುವಿನ ವ್ಯತ್ಯಾಸಗಳೇನು ; ಬಿ ಖಾತಾ ಹೆಸರಿನಲ್ಲಿ ದಂದೆ ನಡೆಯುತ್ತಿರುವುದು ಮತ್ತು ಜನರನ್ನು ಬಿ.ಬಿ.ಎಂ.ಪಿ. ಖಾತೆಯ ಹೆಸರಲ್ಲಿ ಶೋಷಣೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು?